# ಗಡ್ಡದ ಅಜ್ಜಯ್ಯ

ಮದ್ರಾಸ್ ಟೆಕ್ಸ್ಟ ಬುಕ್ ಕಮಿಟಿಯಿಂದ ಮಂಜೂರಾಗಿದೆ.

ಲೆಬಸಿನಲ್ಲಿ IIನೇ ತರಗತಿಯ ಉಪಪಠ್ಯ ಪುಸ್ತಕವಾಗಿದೆ.

ತೃತೀಯ ಮುದ್ರಣ



ಸ್ವತೀ ಪ್ರಿಂಟಿಂಗ್ ವರ್ಕ್ಸ್, ಲಿಮಿಟೆಡ್, ಮಂಗಳೂರು.

ಕ್ರಯ: ರೂ. ೦-೧-೬.

ಬ್ಯೂಟರ್ಸ್:—

ಸೆಲ್ ಮಿಶನ್ ಬುಕ್ ಡಿಪೋ,

ಮಂಗಳೂರು.

1936




# ಗಡ್ಡದ ಅಜ್ಜಯ್ಯ



ಒಂದು ಊರಲ್ಲಿ ಒಬ್ಬಳು ಅಜ್ಜಿ ಇದ್ದಳು. ಆ ಅಜ್ಜಿಯ ಮನೆಯಲ್ಲಿ ಎರಡು ಆಡುಗಳು ಇದ್ದವು. ಒಂದು ಗಂಡು. ಒಂದು ಹೆಣ್ಣು. ಆ ಎರಡು ಆಡುಗಳಿಗೆ ಎರಡು ಮರಿಗಳು ಇದ್ದವು. ಒಂದು ಗಂಡು. ಒಂದು ಹೆಣ್ಣು.

ಗಂಡು ಆಡಿಗೆ ಏನು ಹೆಸರು? ಹೋತ. ಹೆಣ್ಣು ಆಡಿಗೆ ಏನು ಹೆಸರು? ಮೇಕೆ.

ಅಜ್ಜಿ ನಿತ್ಯವೂ ಬೆಳಗ್ಗೆ ಹಾಲು ಕರೆಯುವಳು. ಆ ಮೇಲೆ ಮೇಕೆ ಮತ್ತು ಹೋತನನ್ನು ಹೊರಗೆ ಬಿಡುವಳು,—ಮೇಯುಲಿಕ್ಕೆ! ಅಜ್ಜಿ ಮರಿಗಳನ್ನು ಹೊರಗೆ ಬಿಡುತ್ತಿರಲಿಲ್ಲ,--ಮೇಯುಲಿಕ್ಕೆ!

ಒಂದು ದಿನ ಹೆಣ್ಣು ಮರಿ: 'ಅಮ್ಮಾ! ಈ ದಿನ ನಾನು ನಿನ್ನ ಹಿಂದೆ




ಗಂಡು ... ನು ನಿನ್ನ ಹಿಂದೆ ಬರುತ್ತೇನೆ'

ಹಾಗೆ ಆ ದಿನ ಗಂಡು ಆಡು ಹೊರಟಿತು.

ಅದರ ಹಿಂದೆ ಗಂಡು ಮರಿ ಹೊರಟಿತು.

ಅದರ ಹಿಂದೆ ಹೆಣ್ಣು ಆಡು ಹೊರಟಿತು.

ಅದರ ಹಿಂದೆ ಹೆಣ್ಣು ಮರಿ ಹೊರಟಿತು.

ಮರಿಗಳು, ಮೇಕೆ ಮತ್ತು ಹೋತ ಗುಡ್ಡ ಹತ್ತಿ ...ತ್ತು.

...ತ್ತು

ಮರಿಗಳು: 'ಇಲ್ಲಿ ಹುಲ್ಲು ಇಲ್ಲ. ಮುಳ್ಳು ಇದೆ. ಮ... ಹೋಗುವ' ಎಂದವು.

ಆಡುಗಳು ಮತ್ತು ಮರಿಗಳು ಗುಡ್ಡದಿಂದ ಇಳಿದವು. ಹೊಲಕ್ಕೆ ಬಂದವು.

ಮರಿಗಳು: 'ಇಲ್ಲಿ ಹುಲ್ಲು ಇಲ್ಲ. ನೆಲ್ಲು ಇದೆ. ಮುಂದೆ ಹೋಗುವ' ಎಂದವು.

ಮರಿಗಳು ಮತ್ತು ಆಡುಗಳು ಹೊಲವನ್ನು ಬಿಟ್ಟವು. ತೋಟಕ್ಕೆ ಹೊಕ್ಕವು.

ಮರಿಗಳು: 'ಇಲ್ಲಿ ಹುಲ್ಲು ಇಲ್ಲ. ಬಾಳೆ ಇದೆ. ಮುಂದೆ ಹೋಗುವ' ಎಂದವು.

ಮರಿಗಳು, ಮೇಕೆ ಮತ್ತು ಹೋತ ತೋಟದಿಂದ ಹೊರಟವು. ಓಣಿಗೆ ನುಗ್ಗಿದವು. ಓಣಿಯಿಂದ ಹಳ್ಳಕ್ಕೆ ಕಾಲು ಇಟ್ಟವು. ಹಳ್ಳದಲ್ಲಿ ಸ್ವಲ್ಪ ನೀರು ಇತ್ತು. ಆ ನೀರು ಹೇಳುತಿತ್ತು:—

'ಹನಿ ಕೂಡಿ ಹಳ್ಳ. ಹಳ್ಳ ಕೂಡಿ ಹೊಳೆ.'

ಆಡುಗಳೂ, ಮರಿಗಳೂ ಹಳ್ಳ ದಾಟಿದವು. ಮೈದಾನಿಗೆ ಬಂದವು.

ಮರಿಗಳು: ‘ಗುಡ್ಡ ಹತ್ತಿದೆವು. ಗುಡ್ಡ ಇಳಿದೆವು. ಅಲ್ಲಿ ಲ್ಲು ಇಲ್ಲ! ಮುಳಿ. ಗದ್ದೆಗೆ ಬಂದೆವು. ಗದ್ದೆ ಬಿಟ್ಟೆವು. ವಾ ಹುಲ್ಲು ಇಲ್ಲ! ನೆಲ್ಲು. ತೋಟಕ್ಕೆ ಹೊಕ್ಕೆವು. ತೋಟ ನಪ್ಪ ಹೊರಟೆವು. ಅಲ್ಲಿ ಹುಲ್ಲು ಇಲ್ಲ! ಬಾಳೆ. ಇಲ್ಲಿ ಸಿನಲ್ಲಿ ಹುಲ್ಲು ಇದೆ. ಆಹಾ! ಹಸಿ ಹುಲ್ಲು. ಎಳೇ ಹುಲ್ಲು. ಎಷ್ಟು ಸೊಂಪಾಗಿ ಬೆಳೆದಿದೆ!’ ಎಂದವು.

ಹೋತ ಕಪ್ಪು. ಗಂಡು ಮರಿ ಕಪ್ಪು.

ಮೇಕೆ ಬೆಳ್ಳಗೆ. ಹೆಣ್ಣು ಮರಿ ಬೆಳ್ಳಗೆ.

ಹಸೀ ಹುಲ್ಲು ಪಚ್ಚೆ. ಎಳೇ ಹುಲ್ಲು ಪಚ್ಚೆ.

ಆಡುಗಳೂ, ಮರಿಗಳೂ ಮೇದವು. ಮೇಯುತ್ತಾ ಹೋದವು.

ಹುಲ್ಲನ್ನು ಹಲ್ಲುಗಳಿಂದ ಕಿತ್ತವು. ಕೀಳುತ್ತಾ ಹೋದವು.

ಹುಲ್ಲನ್ನು ದವಡೆಗಳಲ್ಲಿ ಅಗಿದವು. ಅಗಿಯುತ್ತಾ ಹೋದವು.

ಹುಲ್ಲನ್ನು ಬಾಯಲ್ಲಿ ತಿಂದವು. ತಿನ್ನುತ್ತಾ ಹೋದವು.

ಹುಲ್ಲನ್ನು ಗಂಟಲಿಂದ ನುಂಗಿದವು. ನುಂಗುತ್ತಾ ಹೋದವು.

ಆಡುಗಳೂ, ಮರಿಗಳೂ ಬೆಳಗ್ಗೆ ಕೊಟ್ಟಿಗೆಯಲ್ಲಿ ಇದ್ದವು. ಆಗ ಬಿಸಿಲು ಹುಟ್ಟಿತ್ತು.

ಮಧ್ಯಾಹ್ನ ಮೈದಾನಿನಲ್ಲಿ ಇದ್ದವು. ಆಗ ಬಿಸಿಲು ಏರಿತ್ತು.

ಸಂಜೆ ಕಾಡಿನ ಬಳಿ ಇದ್ದವು. ಆಗ ಬಿಸಿಲು ಇಳಿದಿತ್ತು.

ಕತ್ತಲೆ ಆಯಿತು. ಮರದ ನೆರಳಿನ ಕತ್ತಲೆ ಮತ್ತು ಸಂಜೆಯ ಕತ್ತಲೆ. ಅದಲ್ಲದೆ ಮೋಡಗಳ ಕತ್ತಲೆ.

ಮೂರು ಸಂಜೆ ಆಗುತ್ತಾ ಇತ್ತು.

ಮೋಡ ತುಂಬುತ್ತಾ ಇತ್ತು.

ಗಾಳಿ ಬೀಸುತ್ತಾ ಇತ್ತು.

ಆಗ ಮಿಂಚು ಮಿಂಚಿತು. ಗುಡುಗು ಗುಡುಗಿತು.

ಮರಿಗಳು: 'ಮಳೆ ಹನಿ ಹಾಕುತ್ತದೆ' ಎಂದವು.

ಹೋತ: 'ಹೋಗುವ. ಮನೆಗೆ ಹೋಗುವ' ಎಂದು ಮೇಕೆ, ಹೋತ ಮತ್ತು ಮರಿಗಳು ಹೊರಟವು.

ಆಡುಗಳಿಗೂ, ಮರಿಗಳಿಗೂ ದಾರಿ ತಪ್ಪಿತು. ಕತ್ತಲೆಯಲ್ಲಿ ದಾರಿ ಕಾಣಲಿಲ್ಲ.

ಮರಿಗಳು: 'ಹನಿಗಳು ದೊಡ್ಡದಾಗಿ ಬೀಳುತ್ತವೆ' ಎಂದವು.

ಹೋತ: 'ನಾವು ಈಗ ಎಲ್ಲಿ ಇದ್ದೇವೆ?' ಎಂದು ನಿಂತಿತು.

ಮರಿಗಳು: 'ಇದು ಗುಡ್ಡೆ ಅಲ್ಲ. ಹೊಲ ಅಲ್ಲ. ತೋಟ ಅಲ್ಲ. ಮೈದಾನು ಅಲ್ಲ' ಎಂದವು.

ಮೇಕೆ:—'ಇದು ಕಾಡು.'

ಮರಿಗಳು:—'ಮಿಂಚು ಬಲವಾಯಿತು. ಗುಡುಗು ಬಲವಾಯಿತು. ಗಾಳಿ ಬಲವಾಯಿತು. ಮಳೆ ಬಲವಾಯಿತು. ನಮಗೆ ಮನೆ ಎಲ್ಲಿ?'

ಹೋತ ಸುತ್ತಲೂ ನೋಡಿತು. ಒಂದು ಕಲ್ಲುಬಂಡೆಯ ರಾಶಿಯಲ್ಲಿ ಸ್ವಲ್ಪ ಎಡೆ ಕಂಡಿತು.

'ಇಲ್ಲಿ ಬನ್ನಿ ಮಕ್ಕಳೇ!' ಎಂದು ಹೇಳಿತು

ಆಡುಗಳೂ, ಮರಿಗಳೂ ಆ ಎಡೆಯಲ್ಲಿ ಹೊಕ್ಕು ಒಳಗೆ ಹೋದವು.

ಆಗ ಮಳೆ ಸುರಿಯಿತು. ಗುಡುಗು ಗುಡುಗಿತು. ಗಾಳಿ ಬೀಸಿತು. ಮಿಂಚು ಮಿಂಚಿತು.

ಆ ಮಿಂಚಿನಲ್ಲಿ ನೆಲದ ಮೇಲೆಲ್ಲ ಹುಲಿಯ ರೋಮ ಕಂಡಿತು.

ಮೇಕೆ:—'ಇಲ್ಲಿ ನೋಡಿ! ರೋಮ. ಹುಲಿಯ ರೋಮ. ಇದು ಗವಿ. ಹುಲಿಯ ಗವಿ.'

ಹೋತ:—'ಅಯ್ಯೋ! ಎಂಥ ಮೋಸವಾಯಿತು! ಹುಲಿ ಬಂದೀತು. ನಮ್ಮನ್ನು ತಿಂದೀತು. ಮರಿಗಳನ್ನು ನುಂಗೀತು. ಏನು ಮಾಡುವ?'

ಹೋತವು ಸ್ವಲ್ಪ ಯೋಚಿಸಿತು. ಗವಿಯ ಬಾಗಿಲಿಗೆ ಒಂದು ಸಣ್ಣ ಕಲ್ಲನ್ನು ಸರಿಸಿತು. ಸುಮ್ಮನೆ ಕೂತಿತು.

ಮರಿಗಳು:—'ಇದು ಯಾರ ಮನೆ?'

ಹೋತ:—'ಇದು ಈಗ ನಮ್ಮ ಮನೆ.'

ಮರಿಗಳು:—'ಇದು ಎಂಥ ಮನೆ?'

'ಮಣ್ಣಿನ ಮನೆ ಅಲ್ಲ!
ಇಟ್ಟಿಗೆಯ ಮನೆ ಅಲ್ಲ!
ಕಲ್ಲಿನ ಮನೆ ಅಲ್ಲ!
ಮರದ ಮನೆ ಅಲ್ಲ!
ಹಂಚಿನ ಮನೆ ಅಲ್ಲ!
ಮುಳಿಯ ಮನೆ ಅಲ್ಲ!
ಎಂಥ ಮನೆ ಇದು?'

ಹೋತ:—'ಇದು ಬಂಡೆಗಳ ಮನೆ. ಬಂಡೆಯೇ ಗೋಡೆ. ಬಂಡೆಯೇ ಕಿಟಕಿ. ಬಂಡೆಯೇ ಬಾಗಿಲು. ಮರದ ಎಲೆಗಳೇ ಮಾಡು.'

ಅಷ್ಟರಲ್ಲಿ ಹುಲಿ ಬಂತು.
ಹುಲಿ ಹುಲ್ಲಿನ ಹಾಗೆ
ಹಸುರೇ? ಅಲ್ಲ.
ತಾವರೆಯ ಹಾಗೆ
ಬೆಳ್ಳಗೇ? ಅಲ್ಲ.



ಮಂಜೆಟ್ಟಿಯ ಹಾಗೆ ಕೆಂಪೇ? ಅಲ್ಲ.
ಸೇವಂತಿಗೆ ಹೇಗೆ ಇದೆ? ಹಳದಿ.
ಕಾಗೆ ಹೇಗೆ ಇದೆ? ಕಪ್ಪು.

ಹಳದಿ, ಕಪ್ಪು ಈ ಎರಡು ಬಣ್ಣಗಳೂ ಬೆರೆತು ಹುಲಿಯ ಮೈಯ ಮೇಲೆ ಇದ್ದವು.

ಹುಲಿ ಗವಿಗೆ ಬಂತು. ಬಾಗಲು ಹಾಕಿದೆ. ನೂಕಿತು. ಬಾಗಿಲು ತೆಗೆಯಲಿಲ್ಲ.

ಹುಲಿ: ಯಾರೋ ಅದು ಒಳಗೆ?' ಎಂದು ಅಬ್ಬರಿಸಿತು.

ಹೋತ: 'ಯಾರೋ ಅದು ಹೊರಗೆ?' ಎಂದು ಕೇಳಿತು.

'ನನ್ನ ಹೆದರಿಕೆ ಇಲ್ಲದ ಈ ಪ್ರಾಣಿ ಯಾವದು? ನನಗಿಂತ ದೊಡ್ಡ ಪ್ರಾಣಿಯೇ?' ಎಂದು ಹುಲಿ ಸಂಶಯಪಟ್ಟಿತು. ಮತ್ತು ಹೀಗೆ ಹೇಳಿತು:—

'ನಾನು ಹುಲಿರಾಯ. ನೀನು ಯಾರು?'

ಹೋತ:—'ನಾನೇ ಅಜರಾಜ!'

'ಅಜ' ಎಂದರೆ 'ಆಡು' ಎಂದು ಅರ್ಥ.

ಹುಲಿ:—'ರಾಜ! ಎಲ್ಲಿಗೆ?'

ಹೋತ:—'ನೀನು 'ರಾಯ'—ಎಲ್ಲಿಗೆ?'

ಹುಲಿ:—'ಕಾಡಿಗೆ.'

ಹೋತ:—'ನಾನು,—ನಾಡಿಗೆ.'

ಹುಲಿ:—'ನೀನು ಇಲ್ಲಿಗೆ ಏಕೆ ಬಂದೆ?'

ಹೋತ:—'ನಿನಗೆ ಅಪ್ಪಣೆ ಕೊಡಲಿಕ್ಕೆ. ನೀನು ಈಗಲೇ ಇಲ್ಲಿಂದ ಹೋಗಬೇಕು.'

ಹುಲಿಗೆ ಬಹಳ ಆಶ್ಚರ್ಯ ಆಯಿತು. ಸಂಶಯವು ಇನ್ನೂ ಹೆಚ್ಚಿತು. ‘ಇದು ಯಾವುದೋ ನನಗಿಂತಲೂ ದೊಡ್ಡ ಪ್ರಾಣಿ. ಆದುದರಿಂದ ಅಪ್ಪಣೆ ಮಾಡುತ್ತದೆ’ ಎಂದುಕೊಂಡಿತು. ಆ ಮೇಲೆ,

ಹುಲಿ:—‘ನಾನು ಹೋಗದೆ ಇದ್ದರೆ?’

ಹೋತ:—‘ಇಲ್ಲಿ ನೋಡು. ಇದು ನನ್ನ ಕಿರಿಬೆರಳಿನ ಉಗುರು. ಇದರಿಂದ ನಿನ್ನ ಹೊಟ್ಟೆಯನ್ನು ಬಗೆಯುವೆನು.’

ಹೀಗೆ ಹೇಳಿ ಹೋತ ತನ್ನ ಕೊಂಬನ್ನು ಗವಿಯ ಸಂದಿನಲ್ಲಿ ತೋರಿಸಿತು.

ಹುಲಿ ಸ್ವಲ್ಪ ಹೆದರಿತು. ‘ಕಿರಿಬೆರಳಿನ ಉಗುರೇ ಇಷ್ಟು ದೊಡ್ಡದು. ಈ ಪ್ರಾಣಿ ಇನ್ನು ಎಷ್ಟು ದೊಡ್ಡದೋ’ ಎಂದು ಒಂದು ಹೆಜ್ಜೆ ಹಿಂದೆ ಸರಿಯಿತು.

ಹೋತ ನೋಡಿತು. ಹುಲಿ ಮೊದಲು ಇದ್ದಲ್ಲಿ ಇಲ್ಲ. ಒಂದು ಹೆಜ್ಜೆ ಹಿಂದೆ.

‘ಇಲ್ಲಿ ನೋಡು. ಇದು ನನ್ನ ರೋಮ. ಇದರಿಂದ ನಿನ್ನನ್ನು ಕಟ್ಟಿ ಅಪ್ಪಳಿಸುವೆನು’ ಎಂದು ಹೋತ ತನ್ನ ಬಾಲವನ್ನು ಗವಿಯ ಸಂದಿನಲ್ಲಿ ತೋರಿಸಿತು.

‘ಅಬ್ಬ! ಇದು ಎಷ್ಟು ದೊಡ್ಡ ಪ್ರಾಣಿ! ಒಂದು ರೋಮವೇ ಇಷ್ಟು ಉದ್ದ. ದಪ್ಪ. ಇನ್ನು ಈ ಪ್ರಾಣಿಯ ಬಲವು ಎಷ್ಟು ಇರಬಹುದೋ’ ಎಂದು ಮತ್ತೊಂದು ಹೆಜ್ಜೆ ಹಿಂದೆ ಸರಿಯಿತು.

ಹೋತ ನೋಡಿತು. ಹುಲಿ ಮೊದಲು ಇದ್ದಲ್ಲಿ ಇಲ್ಲ. ಇನ್ನೊಂದು ಹೆಜ್ಜೆ ಹಿಂದೆ!

'ಇಲ್ಲಿ ನೋಡು. ಇದು ನನ್ನ ಗಡ್ಡ. ಈ ಗಡ್ಡದಿಂದ ಗುಡ್ಡದಂಥ ಕಲ್ಲು ಕೆಡವಿ ನಿನ್ನ ತಲೆ ಜಜ್ಜುತ್ತೇನೆ' ಎಂದು ಹೋತ ತನ್ನ ಗಡ್ಡವನ್ನು ಗವಿಯ ಸಂದಿನಲ್ಲಿ ತೋರಿಸಿತು



'ಇದು ವಿಚಿತ್ರ ಪ್ರಾಣಿಯೇ ಸರಿ. ನನಗೆ ಈ ಮನೆಯೂ ಬೇಡ. ಮಾರಾರೂ ಬೇಡ. ಜೀವ ಒಂದು ಇದ್ದರೆ ಬೇಡಿ ತಿಂದೇನು' ಎಂದು ಹುಲಿ ಹೇಳಿಕೊಂಡಿತು. ಹಿಂದೆ ತಿರುಗಿತು.

ಆಗ ಒಂದು ಸಿಡಿಲು ಬಡಿಯಿತು.

'ಇದೇ ನನ್ನ ಕೂಗು! ಬಾ! ಯುದ್ಧಕ್ಕೆ ನಿಲ್ಲು!' ಎಂದು ಹೋತ ಕೂಗಿತು.

ಈಗ ಹುಲಿ ಓಡಿತು. ಶ್ವಾಸ ಕಟ್ಟಿ ಓಡಿತು.

ಏನು ಮಳೆ! ಏನು ಗಾಳಿ! ಏನು ಸಿಡಿಲು! ಏನು ಮಿಂಚು! ಏನು ಗುಡುಗು! ಏನು ಕತ್ತಲೆ! ಆದರೂ ಹುಲಿ ನಿಲ್ಲಲಿಲ್ಲ. ಓಡದೆ ಇರಲಿಲ್ಲ. ಓಡಿತಯ್ಯಾ! ಓಡಿತು.

ಹುಲಿ ಕೆಸರಲ್ಲಿ ಜಾರಿತು. ಮಳೆಯಲ್ಲಿ ತೋಯಿತು. ಗುಳಿಯಲ್ಲಿ ಬಿತ್ತು.

ಆದರೂ ಹುಲಿ ನಿಲ್ಲಲಿಲ್ಲ. ಓಡದೆ ಇರಲಿಲ್ಲ. ಓಡಿತಯ್ಯಾ! ಓಡಿತು.

ಮರಕ್ಕೆ ಹುಲಿಯು ಮೈ ತಗುಲಿತು.

ಬಂಡೆಗೆ ಹುಲಿಯು ಮೈ ಆರಚಿತು.

ಹುಲಿಯ ಕಾಲಿಗೆ ಕಲ್ಲು ಒತ್ತಿತು.

ಹುಲಿಯ ಪಾದಕ್ಕೆ ಮುಳ್ಳು ನೆಟ್ಟಿತು.

ಗಾಯ ಆಯಿತು. ತೂತು ಆಯಿತು. ರಕ್ತ ಬಂತು.

ಆದರೂ ಹುಲಿ ನಿಲ್ಲಲಿಲ್ಲ. ಓಡದೆ ಇರಲಿಲ್ಲ. ಓಡಿ ತಯ್ಯಾ! ಓಡಿತು.

ಈಗ ಮೋಡ ಹರಿಯಿತು. ಮಳೆ ನಿಂತಿತು.

ಗಾಳಿ ನಿಂತಿತು. ಸಿಡಿಲು ನಿಂತಿತು.

ಮಿಂಚು ನಿಂತಿತು. ಗುಡುಗು ನಿಂತಿತು.

ಹುಲಿಗೆ ಓಡಿ ಓಡಿ ಅರ್ಧ ಜೀವ ಆಯಿತು.

ಹುಲಿ 'ಉಸ್ಸಪ್ಪಾ!' ಎಂದು ಕಾಲು ಚಾಚಿ ಬಿತ್ತು.

ಹುಲಿ ಬಿದ್ದ ಸ್ಥಳದ ಹತ್ತಿರ ಒಂದು ಮರ. ಮರಕ್ಕೆ ಹಂಬಿ ಒಂದು ಬಳ್ಳಿ. ಬಳ್ಳಿಯ ಹತ್ತಿರ ಒಂದು ಗಿಡ. ಗಿಡದ ಬುಡದಲ್ಲಿ ಒಂದು ಪೊದರು. ಪೊದರಿನ ಒಳಗೆ ಒಂದು ನರಿಯಣ್ಣ!



ಆ ನರಿ ಆ ದಿನ ಏನು ಮಾಡಿತ್ತು ಎಂದರೆ,—

ಒಂದು ಹಳ್ಳಿಗೆ ಹೋಗಿತ್ತು.

ಆಹಾರ ಹುಡುಕುತ್ತಾ ಹಳ್ಳಿಗೆ ಹೋಗಿತ್ತು.

ಹಳ್ಳಿಗೆ ಹೋಗಿ ಒಬ್ಬ ರೈತನ ಮನೆಗೆ ನುಗ್ಗಿತ್ತು.

ರೈತನ ಮನೆಗೆ ನುಗ್ಗಿ ಒಂದು ಕೋಳಿ ಕದ್ದಿತ್ತು.

ಕೋಳಿಯನ್ನು ಕದ್ದು ಅದನ್ನು ಕಾಡಿಗೆ ಕಚ್ಚಿಕೊಂಡು ಬಂದಿತ್ತು. ಆ ಮೇಲೆ,

ಕೋಳಿಯನ್ನು ಕುತ್ತಿಗೆ ಹಿಚುಕಿ ಕೊಂದಿತ್ತು.

ಕೋಳಿಯನ್ನು ಕೊಂದು ಹೊಟ್ಟೆ ತುಂಬ ತಿಂದಿತ್ತು.

ಹೊಟ್ಟೆ ತುಂಬ ತಿಂದು ಗರಗರನೆ ತೇಗುತ್ತಿತ್ತು.

ಗರಗರನೆ ತೇಗುತ್ತಾ ಸಂತೋಷದಿಂದ ಕುಣಿಯುತ್ತಿತ್ತು. ಕುಣಿಯುವಾಗ,

ಒಂದು ಹಾಡು ಹೇಳಬೇಕೆಂದು ನರಿಗೆ ತೋರಿತು. ಅದರ ಗಂಟಲಿನಿಂದ ಒಂದು ರಾಗ ಹೊರಟಿತು.

'ಹುಕ್ಕೆ, ಹುಕ್ಕೆ, ಹುವ್ವೆ, ಹುವ್ವೆ, ಹುಕ್ಕೆ, ಹುವ್ವೆವೇ!'
ಎಂಥ ಕೊಳಕು ರಾಗ!

ಈ ರಾಗ ಕಿವಿಗೆ ಬಿತ್ತೋ ಇಲ್ಲವೋ ಹುಲಿ 'ಯಾರು ಅದು?' ಎಂದು ಕೇಳಿತು.

ನರಿ ಪೊದರಿಂದ ತಲೆ ಹೊರಗೆ ಹಾಕಿತು. ನೋಡಿತು. ಹುಲಿರಾಯ!

ನರಿಗೆ ಈಗ ಓಡುವುದಕ್ಕೂ ಅಲ್ಲ ಅಥವಾ ಓಡದೆ ಇರುವುದಕ್ಕೂ ಅಲ್ಲ. ನರಿ ಸಿಕ್ಕಿಬಿತ್ತು.

ಹುಲಿ:—'ನರಿಯಣ್ಣಯ್ಯಾ! ನಮಸ್ಕಾರ.'

ನರಿ:—'ಹಿರಿಯ ಅಣ್ಣಯ್ಯಾ! ದೂರದಿಂದ ನಿನಗೂ ನಮಸ್ಕಾರ' ಎಂದು ಪೊದೆಯೊಳಗಿಂದ ಹೇಳಿತು.

ಹುಲಿ:—'ಹೀಗೆ ಬಾ! ನಾನು ನಿನ್ನನ್ನು ಏನೂ ಮಾಡುವುದಿಲ್ಲ.'

ನರಿ:—'ನೀನೇನೋ ಬಹಳ ಸಾಧು; ಏನೂ ಮಾಡುವುದಿಲ್ಲ. ಆದರೆ ನನ್ನ ಜೀವ 'ಟುಕು ಟುಕು' ಅನ್ನುತ್ತದೆ.'

ಹುಲಿ:—'ನನ್ನ ಬಾಲದ ಆಣೆ, ನಿನಗೆ ಏನೂ ಮಾಡುವುದಿಲ್ಲ! ಬಾ!'

ನರಿ ಮೆಲ್ಲಗೆ ಹೊರಗೆ ಬಂತು.

ಹುಲಿ:—'ನೋಡು ನನ್ನ ಅವಸ್ಥೆ!'

ನರಿ:—'ಏನಿದು! ಮೈ ತುಂಬ ಮಣ್ಣು. ಕೈ ತುಂಬ ಮರಳು. ಹೊಟ್ಟೆ ತುಂಬ ಕೆಸರು!'

ಹುಲಿ:—'ನಾನು ಸಿಂಹವನ್ನು ನೋಡಿದ್ದೇನೆ.'

ನರಿ:—'ನಾನು ಅದರ ಹೆಸರು ಕೇಳಿದ್ದೇನೆ.'

ಹುಲಿ:—'ನಾನು ಆನೆಯನ್ನು ನೋಡಿದ್ದೇನೆ.'

ನರಿ:—'ನಾನು ಮಂಗನನ್ನೂ ಮೊಲವನ್ನೂ ಕಂಡಿದ್ದೇನೆ.'

ಹುಲಿ:—'ಆದರೆ ಇಂಥ ಪ್ರಾಣಿಯನ್ನು ಎಂದೂ ನೋಡಿಲ್ಲ. ಎಂಥ ಪ್ರಾಣಿ! ನೆನಸಿದರೆ ಮೈ ಜುಮ್ಮೆನ್ನುತ್ತದೆ.'

ನರಿ:—'ಅದು ಯಾವ ಪ್ರಾಣಿ? ಹುಲಿರಾಯ?'

ಹುಲಿ:—'ಅಯ್ಯೋ! ಅದರ ಉಗುರು ಎಷ್ಟು ಉದ್ದ! ರೋಮ ಎಷ್ಟು ದೊಡ್ಡದು! ಗಡ್ಡವಾದರೂ ಗಿಡ್ಡವೇ? ಏನೋ ದೇವರ ದಯೆ. ಬದುಕಿ ಬಂದೆ. ಇಲ್ಲದಿದ್ದರೆ ಅದು ಗಡ್ಡದಿಂದ ಗುಡ್ಡದಂಥ ಕಲ್ಲು ಉರುಳಿಸಿ ನನ್ನನ್ನು ಕೊಂದೇ ಹಾಕುತ್ತಿತ್ತು.'

ನರಿ ತನ್ನಲ್ಲಿ 'ನೀನು ಸತ್ತಿದ್ದರೆ ನಮ್ಮಂಥ ನೂರಾರು ನರಿಗಳು ಬದುಕುತಿದ್ದವು' ಎಂದುಕೊಂಡು ಹುಲಿಯೊಡನೆ,—

ನರಿ:—'ಆ ಪ್ರಾಣಿ ಎಲ್ಲಿ ಇದೆ?' 

ಹುಲಿ:—'ನನ್ನ ಮನೆಯಲ್ಲಿ.'

ನರಿ:—'ಆ ಪ್ರಾಣಿಗೆ ಗಡ್ಡ ಉಂಟು. ಅಲ್ಲವೇ?'

ಹುಲಿ:—'ಹೌದು. ಇಷ್ಟು ಉದ್ದ.'

ನರಿ:—'ಹಾಗಾದರೆ ಅದು ಗಡ್ಡದ ಅಜ್ಜಯ್ಯ. ಆಡಪ್ಪ!'

ಆ ಮೇಲೆ ನರಿ ಹುಲಿಗೆ 'ಅಯ್ಯಾ! ಹುಲಿರಾಯ! ನೀನು ಕಾಡಿಗೆಲ್ಲಾ ಅಪ್ಪ. ಅದು ಬರೇ ಆಡಿಗೇ ಅಪ್ಪ. ಇಂಥ ದೊಡ್ಡ ಕಾಡಪ್ಪ ಅಂಥ ಸಣ್ಣ ಆಡಪ್ಪನಿಗೆ ಹೆದರಿ ಓಡುವುದೇ? ಛೀ! ಬಾ. ಹೋಗುವ! ಆಡನ್ನು ಓಡಿಸುವ' ಎಂದು ಹೇಳಿತು.

ಹುಲಿ:—'ಹೆದರಿಕೆಯಾಗುತ್ತದೆ. ಏನು ಮಾಡಲಿ! ಹೇಗೆ ಬರಲಿ!'

ನರಿ:—'ಬಾ, ನೀನು. ನಿನಗೆ ಧೈರ್ಯಕ್ಕೆ ನಾನು ಇದ್ದೇನೆ. ಆಡನ್ನು ಕೊಂದು ಇಬ್ಬರೂ ತಿನ್ನುವ. ಆಡಿನ ಮಾಂಸ ಬಹಳ ರುಚಿ.'



ಹುಲಿ:—'ನಿನ್ನ ಮಾತನ್ನು ಹೇಗೆ ನಂಬಲಿ? ನೀನು ಎಲ್ಲಿ ಯಾದರೂ ನಡುವೆ ಓಡಿಬಿಟ್ಟರೆ?'

ನರಿ:—'ಹಾಗೆ ಹೆದರಿಕೆ ಇದ್ದರೆ ನಿನ್ನ ಬಾಲಕ್ಕೂ ನನ್ನ ಬಾಲಕ್ಕೂ ಗಂಟು ಹಾಕುವ. ಆಗ ನಾನೆ ಬೇರೆಯಾಗಿ ಓಡಲಾರೆ.'

ಹುಲಿ ಇದಕ್ಕೆ ಒಪ್ಪಿತು. ನರಿ ತನ್ನ ಬಾಲಕ್ಕೂ ಹುಲಿಯ ಬಾಲಕ್ಕೂ ಗಂಟು ಹಾಕಿತು.

ಹುಲಿಯೂ ನರಿಯೂ ಹೊರಟವು.

ಹುಲಿಯ ಮನೆಗೆ ಅವು ಹೊರಟವು.

ಹುಲಿಯ ಮನೆಯಲ್ಲಿ ಇದ್ದ ಆಡನ್ನು ಓಡಿಸಲು ಅವು ಹೊರಟವು.

ಹುಲಿಯ ಮನೆಯಲ್ಲಿ ಇದ್ದ ಆಡನ್ನು ಓಡಿಸಬೇಕೆಂದು ಹುಲಿಯೂ ನರಿಯೂ ತಮ್ಮ ಬಾಲಗಳನ್ನು ಗಂಟು ಹಾಕಿಕೊಂಡು ಹುಲಿಯ ಮನೆಗೆ ಹೊರಟವು.

ಹುಲಿಗಿಂತ ನರಿ ಸಣ್ಣದು.

ಹುಲಿಗಿಂತ ನರಿಯ ಮೈ ಹಗುರ.

ಆದ್ದರಿಂದ ಹುಲಿಗಿಂತ ನರಿ ಚುರುಕಾಗಿ ನಡೆಯುತ್ತಿತ್ತು.

ನರಿಗಿಂತ ಹುಲಿ ದೊಡ್ಡದು.

ನರಿಗಿಂತ ಹುಲಿಯ ಮೈ ಭಾರ.

ಆದ್ದರಿಂದ ಹುಲಿ ನರಿಗಿಂತ ಮೆಲ್ಲಗೆ ನಡೆಯುತ್ತಿತ್ತು.

ನರಿ ಮುಂದೆ ನಡೆಯಿತು. ನಡೆಯುತ್ತಾ,

'ಇದು ಏರು. ಇದು ತಗ್ಗು. ಇದು ಕೆಸರು. ಇದು ಜಾರಿಕೆ. ಇದು ನೀರು. ಇದು ಮರಳು. ಇದು ಗಿಡ. ಇದು ಪೊದೆ' ಎಂದು ಹುಲಿಗೆ ಎಚ್ಚರ ಹೇಳುತ್ತಿತ್ತು.

ಹುಲಿ ಅದನ್ನು ಕೇಳುತ್ತ ಎಚ್ಚರದಿಂದ ಕಾಲು ಇಡುತ್ತಿತ್ತು.

ಆಗ ಬೆಳದಿಂಗಳು ಹುಟ್ಟಿತು. ಹಬ್ಬಿತು. ಹೇಗೆ?

ಹಾಲು ಚೆಲ್ಲಿದ ಹಾಗೆ.

ಸುಣ್ಣದ ನೀರು ಸುರಿದ ಹಾಗೆ.

ಅಕ್ಕಿಯ ಹಿಟ್ಟು ಮೆತ್ತಿದ ಹಾಗೆ.

ಮಲ್ಲಿಗೆಯ ಹೂ ಉದುರಿದ ಹಾಗೆ.

ಆಡಿನ ಮರಿಗಳು ಗವಿಯ ಸಂದಿನಲ್ಲಿ ನೋಡುತ್ತಾ ಇದ್ದವು.

'ಅಪ್ಪಾ! ಅಪ್ಪಾ! ಯಾವುದೋ ಎರಡು ಪ್ರಾಣಿಗಳು ಇತ್ತ ಬರುತ್ತಿವೆ. ಬಾಲಕ್ಕೆ ಬಾಲ ಗಂಟು ಹಾಕಿದೆ.' ಎಂದು ಅವು ಹೇಳಿದುವು.

ಹೋತ ಗವಿಯ ಸಂದಿನಲ್ಲಿ ಇಣಿಕಿ ನೋಡಿತು.

'ಓಹೋ! ಅದು ನಮ್ಮ ನರಿಯಣ್ಣ. ಹುಲಿ ಹೆದರುತ್ತದೆ ಎಂದು ಬಾಲಕ್ಕೆ ಬಾಲ ಗಂಟು ಹಾಕಿಕೊಂಡು ಬರುತ್ತದೆ. ಒರಲಿ. ಮಾಡುತ್ತೇನೆ ಬಗೆ' ಎಂದು ಹೇಳಿತು.

ಹುಲಿಯೂ, ನರಿಯೂ ಗವಿಯ ಬಾಗಿಲಿಗೆ ಬಂದವು. ಆಗ ಹೋತ:—

'ನರಿಯಣ್ಣಾ! ಬಂದೆಯಾ? ನನಗೆ ಬೇಕಾದ ಹುಲಿಯನ್ನು ಉಪಾಯದಿಂದ ಕರೆದು ತಂದೆಯಾ? ನಾನು ಹೇಳಿದಂತೆ ಹುಲಿಯ ಮಾಂಸದಲ್ಲಿ ಅರ್ಧ ಪಾಲು ನಿನಗೂ ಕೊಡುತ್ತೇನೆ. ಹುಲಿಯ ಮಾಂಸ ಎಷ್ಟು ರುಚಿ! ಎಷ್ಟು ಪರಿಮಳ! ಆ ಪರಿಮಳಕ್ಕೆ ನನ್ನ ಮೂಗು ಹೇಗೆ ಅರಳಿದೆ ನೋಡು' ಎಂದು ಹೇಳಿತು.

ಮತ್ತೆ ಗವಿಯ ಸಂದಿನಲ್ಲಿ ತನ್ನ ಕಾಲನ್ನು ತೋರಿಸಿತು.

'ಎಲಾ! ನರಿಯಣ್ಣ! ನೀನು ಎಂಥ ಮೋಸಗಾರ! ನೀನು ನನ್ನನ್ನು ಕೊಲ್ಲಿಸಿ, ನನ್ನ ಮಾಂಸ ತಿನ್ನಲಿಕ್ಕೆ ಇಲ್ಲಿಗೆ ನನ್ನನ್ನು ಎಳೆದು ತಂದೆಯಾ? ಅಯ್ಯೋ! ಆ ಮೂಗನ್ನು ನೋಡಲಾರೆನು. ಇನ್ನು ಇಲ್ಲಿ ನಿಲ್ಲಲಾರೆನು.'

ಹೀಗೆ ಹೇಳಿದ್ದೇ ತಡ. ಹುಲಿ ಓಡಿತಯ್ಯಾ! ಓಡಿತು— ಮೋಟರ್ ಕಾರಿನ ಹಾಗೆ.

ಹುಲಿ ಓಡಿತು. ಹುಲಿಯ ಒಟ್ಟಿಗೆ ನರಿಯೂ ಓಡಬೇಕಾಯಿತು.

ಹುಲಿಯಷ್ಟು ವೇಗವಾಗಿ ನರಿ ಓಡಲಾರದೆ ಹೋಯಿತು. ನರಿ ದಾರಿಯಲ್ಲಿ ಬಿತ್ತು. ಹುಲಿ ಅದನ್ನು ಎಳೆದುಕೊಂಡೇ ಹೋಯಿತು.

ಹುಲಿ ಅದನ್ನು ಕಲ್ಲಿನ ಮೇಲೆ ದರದರನೆ ಎಳೆಯಿತು.

ಮುಳ್ಳಿನ ಮೇಲೆ ಬರಬರನೆ ಎಳೆಯಿತು.

'ನನಗೆ ಆಡಿನ ಮಾಂಸದಲ್ಲಿ ಪಾಲು ಬೇಡ. ದಮ್ಮಯ್ಯಾ! ನನ್ನ ಬಾಲದ ಗಂಟು ಬಿಚ್ಚುವ' ಎಂದು ನರಿ ಹೇಳಿತು.

ಆದರೂ ಹುಲಿ ಕೇಳಲಿಲ್ಲ. ಓಡುತ್ತಾ ಇತ್ತು.

ನರಿಗೆ ಕಲ್ಲು ಹೆಟ್ಟಿತು. ಮುಳ್ಳು ನೆಟ್ಟಿತು. ಬಂಡೆ ತಗುಲಿತು. ಮರ ಬಡಿಯಿತು. ಮೈ ತುಂಬ ರಾಮಾ ರಕ್ತ ಆಯಿತು. ಆದರೆ ಹುಲಿ ನಿಲ್ಲದೆ ಓಡುತ್ತಾ ಇತ್ತು.

ನರಿಗೆ ಈಗ ಮುಸುಡು ಒಡೆಯಿತು.

ಹಣೆ ಒಡೆಯಿತು.

ಕಾಲು ಮುರಿಯಿತು.

ಕಿವಿ ಹರಿಯಿತು.

ಬೆನ್ನು ಜಜ್ಜಿತು.

ಮೂಗು ಜಜ್ಜೆ ಆಯಿತು.

ಕೈ ಮೊಂಡಾಯಿತು.

ಬಾಲ ತುಂಡಾಯಿತು.

ನರಿ 'ಸತ್ತೆ, ಸತ್ತೆ!' ಎಂದು ಕೂಗಿತು. ಬಂಡೆಕಲ್ಲಿಗೆ ತಲೆ ಬಡಿದು ಪ್ರಾಣಬಿಟ್ಟಿತು.

ಆದರೂ ಹುಲಿ ಜೀವ ಬಿಟ್ಟು ಓಡುತ್ತಾ ಇತ್ತು.

ಕಾಡಿನಲ್ಲಿ ಒಂದು ಬಾವಿ. ಹಾಳು ಬಾವಿ. ಆ ಹಾಳು ಬಾವಿಯ ಹತ್ತಿರ ಒಂದು ಹಗ್ಗ. ಹರಕು ಹಗ್ಗ.

ಆ ಬಾವಿಗೆ ಸುತ್ತಲೂ ಗೋಡೆ ಇರಲಿಲ್ಲ.

ಹುಲಿ ಆ ಬಾವಿಯ ಹತ್ತಿರ ಓಡುತ್ತಾ ಬಂತು.

ಆ ಹರಕು ಹಗ್ಗವನ್ನು ನೋಡಿ ಹಾವು ಎಂದು ಹಾರಿತು.

ಹಾರಿದ ಹುಲಿ ಬಿದ್ದದ್ದು ಆ ಹಾಳು ಬಾವಿಯ ಒಳಗೆ!

ಬಾವಿಯಲ್ಲಿ ಸ್ವಲ್ಪ ನೀರು ಇತ್ತು. ಹುಲಿ ನೀರಿನಲ್ಲಿ ಮುಳುಗಿತು. ಮೇಲಕ್ಕೆ ಬರಲು ಆಗಲಿಲ್ಲ. ಹುಲಿ ಅಲ್ಲಿಯೇ ಸತ್ತುಹೋಯಿತು.

ಮರುದಿನ ಬೆಳಿಗ್ಗೆ ಆಡುಗಳೂ, ಮರಿಗಳೂ ಮನೆಗೆ ಬಂದವು. ಬರುವಾಗ,

ಮುಂದೆ ಹೆಣ್ಣು ಮರಿ.
ಅದರ ಹಿಂದೆ ಹೆಣ್ಣು ಆಡು.
ಅದರ ಹಿಂದೆ ಗಂಡು ಮರಿ.
ಅದರ ಹಿಂದೆ ಗಂಡು ಆಡು.

ಆಡುಗಳೂ, ಮರಿಗಳೂ ಮರಳಿ ಬಂದವೆಂದು ಅಜ್ಜಿಗೆ ಎಷ್ಟು ಸಂತೋಷ! ಹರಿಕೆ ಹೇಳಿಕೊಂಡಂತೆ ಅಜ್ಜಿ ಆ ದಿನ ದೇವರಿಗೆ ಹಣ್ಣುಕಾಯಿ ಮಾಡಿಸಿದಳು.



# ಬಾಯ್ದೆರೆಯ ವರ್ಣನೆ: ವಾಕ್ಯರಚನೆ.

---

## ಅಭ್ಯಾಸ 1

ಕೆಲವು ಅಕ್ಷರಗಳನ್ನು ಹೇಳಿಸುವುದು.

ಉದಾಹರಣೆ:—ಸ, ಯ, ಮ, ರ.

ಅವೇ ಅಕ್ಷರಗಳನ್ನು, ಅರ್ಥ ಬರುವ ಹಾಗೆ, ಕೂಡಿಸಲು ಹೇಳುವುದು.

ಉದಾಹರಣೆ:—ಮರ, ಸರ, ರಸ, ಯಮ, ಸಮಯ.

ಅರ್ಥ ಬರುವಂತೆ ಅಕ್ಷರಗಳನ್ನು ಎರಡು, ಮೂರು, ನಾಲ್ಕೈದಾಗಿ ಜೋಡಿಸುವುದಕ್ಕೆ ಶಬ್ದವೆಂದು ಹೆಸರು.

ಮಕ್ಕಳಿಂದ ಅವರಿಗೆ ಬಳಿಕೆಯಾದ ಕೆಲವು ಶಬ್ದಗಳನ್ನು ಹೇಳಿಸುವುದು.

ಉದಾಹರಣೆ:-ಸ್ಲೇಟು, ಬಳಪ, ಪೆನ್ಸಿಲು, ಕೊಡೆ, ಅಂಗಿ, ಟೋಪಿ.

ಮೇಲಿನ ಶಬ್ದಗಳ ಉಪಯೋಗವಾಗುವಂತೆ ಪ್ರಶ್ನೆ ಕೇಳುವುದು.

(1) ಯಾವುದರ ಮೇಲೆ ಬರೆಯುತ್ತೀರಿ? (2) ಸ್ಲೇಟಿನ ಮೇಲೆ ಯಾವುದರಿಂದ ಬರೆಯುತ್ತೀರಿ? ಕಾಗದದ ಮೇಲೆ ಯಾವುದರಿಂದ ಬರೆಯುತ್ತೀರಿ? ಮೈಗೆ ಏನು ತೊಟ್ಟುಕೊಳ್ಳುತ್ತೀರಿ? ತಲೆಗೆ ಏನು ಇಟ್ಟುಕೊಳ್ಳುತ್ತೀರಿ? ಮಳೆ ಬಿಸಿಲಿಗೆ ಏನನ್ನು ಹಿಡಿದುಕೊಳ್ಳುತ್ತೀರಿ?

## ಅಭ್ಯಾಸ 2

ಈ ಶಬ್ದಗಳನ್ನು ಕೆಳಗಿನ ವಾಕ್ಯಗಳಲ್ಲಿ ತಕ್ಕ ಸ್ಥಾನದಲ್ಲಿ ಇಟ್ಟು ಹೇಳಿಸುವುದು.

(1) ಹತ್ತು (2) ಇಳಿ (3) ಹೊರಡು (4) ಬೆಳೆ (5) ಕೀಳು (6) ನುಂಗು (7) ಮುರಿ (8) ಹರಿ (9) ಹಿಂದೆ (10) ಮುಂದೆ (11) ಮೇಲೆ (12) ಕೆಳಗೆ

(1) ರಾಮಾ! ಬೆಂಚಿನ ಮೇಲೆ.......(2) ರಾಮಾ! ಬೆಂಚಿನಿಂದ.......(3) ಕೃಷ್ಣನು ಶಾಲೆಯಿಂದ ಮನೆಗೆ.......ತ್ತಾನೆ. (4) ರೈತನು ಗದ್ದೆಯಲ್ಲಿ ಬತ್ತವನ್ನು...........ಯುತ್ತಾನೆ. (5) ಅವನು ಗದ್ದೆಯ ಕಳೆಯನ್ನು.......ತ್ತಾನೆ. (6) ನಾವು ಆಹಾರವನ್ನು ಅಗಿಯು.......ತ್ತೇವೆ. (7) ರಾಮನು ಪೆನ್ಸಿಲನ್ನು.......ದನು. (8) ಕೃಷ್ಣನು ಪುಸ್ತಕವನ್ನು.......ದನು. (9) ಕುರ್ಚಿ ಮೇಜಿನ.......ಇದೆ. (10) ಮೇಜು ಕುರ್ಚಿ.......ಇದೆ. (11) ಉಪಾಧ್ಯಾಯರು ರಾಮನನ್ನು ಬೇಂಚಿನ.......ನಿಲ್ಲಿಸಿದರು. (12) ರಾಮನು ಕಾಲು ಜಾರಿ ಬೇಂಚಿನಿಂದ.......ಬಿದ್ದನು.

ಉಚಿತ ಶಬ್ದಗಳನ್ನು ಕೆಳಗಿನ ವಾಕ್ಯಗಳಲ್ಲಿ ತಕ್ಕ ಸ್ಥಾನದಲ್ಲಿ ಇಟ್ಟು ಹೇಳಿಸುವುದು.

(1) ಅಜ್ಜಿ ಹಾಲು.......(2) ಮರಿಗಳು ಮತ್ತು ಆಡುಗಳು ಗುಡ್ಡಕ್ಕೆ....(3) ಅವು ಗುಡ್ಡದಿಂದ....(4) ಅವು ತೋಟದಿಂದ........ (5) ಆಡುಗಳೂ, ಮರಿಗಳೂ ಹಲ್ಲುಗಳಿಂದ ಹುಲ್ಲನ್ನು....(6) ಅವು ದವಡೆಗಳಲ್ಲಿ....(7) ಮಿಂಚು....(8) ಗುಡುಗು....(9) ಗಾಳಿ.... (10) ಮಳೆ....(11) ಮರಕ್ಕೆ ಹುಲಿಯ ಮೈ....(12) ಹುಳಿಯ ಕಾಲಿಗೆ ಕಲ್ಲು....

## ಅಭ್ಯಾಸ 3

"ಮತ್ತು" ಎಂಬ ಶಬ್ದವನ್ನು ಉಪಯೋಗಿಸುವುದು.

(1) ಆಡಿನ ಮರಿಗಳು....ಆಡುಗಳು ಗುಡ್ಡಕ್ಕೆ ಹತ್ತಿದವು. (2) ರಾಮ....ಕೃಷ್ಣ ಇವರು ಒಳ್ಳೆಯ ಹುಡುಗರು. (3) ಹುಡುಗರು ಶಾಲೆಗೆ ಸ್ಲೇಟು....ಬಳಪಗಳನ್ನು ತರುವರು. (4) ನರಿ.... ಹುಲಿಗಳು ತಮ್ಮ ಬಾಲಗಳನ್ನು ಗಂಟು ಹಾಕಿಕೊಂಡವು. (5) ಮಳೆಗಾಲದಲ್ಲಿ ಸಿಡಿಲು....ಮಿಂಚುಗಳು ಬರುತ್ತವೆ.

"ಅಥವಾ" ಎಂಬ ಶಬ್ದವನ್ನು ಉಪಯೋಗಿಸುವುದು.

(1) ನರಿಗೆ ಓಡುವುದಕ್ಕೂ ಅಲ್ಲ,....ಓಡದೆ ಇರುವುದಕ್ಕೂ ಅಲ್ಲ. (2) ರಾಮನು ಶಾಲೆಗೆ ಬರಲಿಕ್ಕೂ ಸಾಕು,....ಬಾರದೆ ಇರ

ಲಿಕ್ಕೆ ಸಾಕು. (3) ನಾಳೆ ಬಿಸಿಲು ಕಾಯಲಿಕ್ಕೂ ಸಾಕು;....ಮಳೆ ಬರಲಿಕ್ಕೂ ಸಾಕು.

**"ಅದಲ್ಲದೆ"** ಎಂಬ ಶಬ್ದವನ್ನು ಉಪಯೋಗಿಸುವುದು.

(1) ಇದು ಮಳೆಗಾಲ;....ರಾತ್ರಿಯ ಸಮಯ. (2) ಇದು ಬೇಸಿಗೆ....ಮಧ್ಯಾಹ್ನದ ಸಮಯ. (3) ನನಗೆ ಕಾಲು ನೋವು....ಮನೆಯಲ್ಲಿ ಹಬ್ಬ.

**"ಆದುದರಿಂದ"** ಎಂಬ ಶಬ್ದವನ್ನು ಉಪಯೋಗಿಸುವುದು.

(1) ನನಗೆ ಕಾಲು ನೋವು **ಅದಲ್ಲದೆ** ಮನೆಯಲ್ಲಿ ಹಬ್ಬ....ಶಾಲೆಗೆ ಈ ದಿನ ಹೋಗಲಿಲ್ಲ. (2) ಈ ದಿನ ಮನೆಯಲ್ಲಿ ಹಬ್ಬ....ಕಜ್ಜಾಯ ಮಾಡಿದ್ದಾರೆ. (3) ರಾಮನು ಕೃಷ್ಣನನ್ನು ಹೊಡೆದನು....ಕೃಷ್ಣನು ಅತ್ತನು.

**"ಆದರೆ"** ಎಂಬ ಶಬ್ದವನ್ನು ಉಪಯೋಗಿಸುವುದು.

(1) ನಮ್ಮ ಉಪಾಧ್ಯಾಯರು ಬೆದರಿಸುತ್ತಾರೆ....ಹೊಡೆಯುವುದಿಲ್ಲ. (2) ಗುಲಾಬೀ ಹೂ ನೋಡಲು ಚೆಂದ;.......ಅದರಲ್ಲಿ ಮುಳ್ಳಿದೆ. (3) ಹಗಲಲ್ಲಿ ಬೆಳಕು ಬೇಡ....ರಾತ್ರಿಯಲ್ಲಿ ಬೆಳಕು ಬೇಕು.

## ಅಭ್ಯಾಸ 4

**"ನನ್ನ"** ಎಂಬ ಶಬ್ದವಿರುವಲ್ಲಿ **"ನನ್ನದು"** ಎಂಬ ಶಬ್ದವಿಟ್ಟು ಹೇಳುವುದು.

(1) ಇದು ನನ್ನ ಪುಸ್ತಕ. (2) ಇದು ನನ್ನ ಸ್ಲೇಟು. (3) ಇದು ನನ್ನ ಕೊಡೆ.

**"ನನ್ನದು"** ಎಂಬ ಶಬ್ದವಿರುವಲ್ಲಿ **"ನನ್ನ"** ಎಂಬ ಶಬ್ದವಿಟ್ಟು ಹೇಳುವುದು.

(1) ಈ ಮನೆ ನನ್ನದು. (2) ಈ ಚೆಂಡು ನನ್ನದು. (3) ಈ ಅಂಗಿ ನನ್ನದು.

**"ಬಹಳ"** ಎಂಬ ಶಬ್ದವಿರುವಲ್ಲಿ **"ಎಷ್ಟು"** ಎಂಬ ಶಬ್ದವಿಟ್ಟು ಹೇಳುವುದು.

(1) ಹುಲ್ಲು ಬಹಳ ಸೊಂಪಾಗಿ ಬೆಳೆದಿದೆ. (2) ರಾಮನು ಬಹಳ ಒಳ್ಳೆಯ ಹುಡುಗ. (3) ತೆಂಗಿನ ಮರ ಬಹಳ ಎತ್ತರ.

**"ಎಷ್ಟು"** ಎಂಬ ಶಬ್ದವಿರುವಲ್ಲಿ **"ಬಹಳ"** ಎಂಬ ಶಬ್ದವಿಟ್ಟು ಹೇಳುವುದು.

(1) ಗುಲಾಬೀ ಹೂ ಎಷ್ಟು ಚೆಂದ! (2) ಮಲ್ಲಿಗೆ ಎಷ್ಟು ಪರಿಮಳ! (3) ಆನೆ ಎಷ್ಟು ದೊಡ್ಡ ಪ್ರಾಣಿ!

**"ಬಹಳ"** ಎಂಬ ಶಬ್ದವಿರುವಲ್ಲಿ **"ಎಂಥ"** ಎಂಬ ಶಬ್ದವಿಟ್ಟು ಹೇಳುವುದು.

(1) ಅಮಾವಾಸ್ಯೆಯ ರಾತ್ರಿಯಲ್ಲಿ ಬಹಳ ಕತ್ತಲೆ. (2) ಕೃಷ್ಣನು ಬಹಳ ದಡ್ಡ.

**"ಮತ್ತು"** ಎಂಬುದನ್ನು ಬಿಟ್ಟು **"ಊ"** ಎಂಬುದನ್ನು ಉಪಯೋಗಿಸಿ ಹೇಳುವುದು.

(1) ರಾಮನು ಮತ್ತು ಕೃಷ್ಣನು ಬಂದನು. (2) ಅವರು ಚೆಂಡನ್ನು ಮತ್ತು ಗುಂಡನ್ನು ತಂದರು.

## ಅಭ್ಯಾಸ 5

ಈ ಶಬ್ದಗಳನ್ನು ತಿದ್ದಿ ಹೇಳುವುದು:—

(1) ವಂದು (2) ಯಲೆ (3) ಯೆಷ್ಟು (4) ವೂಟ (5) ವೂರು (6) ವಂಟೆ (7) ವೇಶ (8) ಯಿದು (9) ಧೂಳಿ (10) ಭಾವಿ (11) ದಿವ್ಸ (12) ಅದ್ರಿಂದ.

ಕೆಳಗೆ ಅಗತ್ಯವಿರುವಲ್ಲಿ ತಿದ್ದಿ ಹೇಳುವುದು.

(1) ನಾನು ಸಾಲೆಯಿಂದ **ಮಣೆಗೆ** ಹೋಗುತ್ತೇನೆ. (2) ನಾನು ಊಟ ಮಾಡುವಾಗ **ಮನೆಯ** ಮೇಲೆ ಕೂಡ್ರುತ್ತೇನೆ. (3) ನಿನ್ನೆ

ನಮ್ಮ ಊರಿಗೆ ಒಂದು ದೊಡ್ಡ **ಆಣೆ** ಬಂದಿತ್ತು. (4) ಒಂದು **ಆನೆಗೆ** ಹನ್ನೆರಡು ಪೈಗಳು. (5) **ಥನ** ಹಾಲು ಕೊಡುತ್ತದೆ. (6) **ಖದಿಯು ವವರು ಖಳ್ಳರು.**

ಕೆಳಗೆ ತಪ್ಪಿರುವಲ್ಲಿ ತಿದ್ದಿ ಹೇಳುವುದು.

(1) ಆಡುಗಳೂ, ಮರಿಗಳೂ, ಗುಡ್ಡಕ್ಕೆ ಇಳಿದವು. (2) ಅವು ಹುಲ್ಲಿಗೆ ತಿಂದವು. (3) ರಾಮನು ಕೊಡೆಯಲ್ಲಿ ಹಿಡಿದುಕೋಂಡು ಶಾಳೆಗೆ ಬಂದನು. (4) ಶಾಲೆ ಬಿಟ್ಟ ಬಳಿಕ ಘನೆಯನ್ನು ಹೋದನು.

## ಅ ಭ್ಯಾ ಸ 6

ಈ ಶಬ್ದಗಳನ್ನು ಕೂಡಿಸಿ ಹೇಳುವುದು.

(1) ತಮ್ಮ+ಅಯ್ಯ (2) ರಾಮ+ಅಯ್ಯ (3) ಕೃಷ್ಣ+ಅಯ್ಯ (4) ರಾಮ+ಅಪ್ಪ (5) ಕೃಷ್ಣ+ಅಪ್ಪ (6) ಸೋಮ+ಅಪ್ಪ (7) ತಮ್ಮ+ಅಣ್ಣ (8) ರಾಮ+ಅಣ್ಣ (9) ಭೀಮ+ಅಣ್ಣ.

(1) ಅಣ್ಣ+ಅಪ್ಪ+ಅಯ್ಯ. (2) ರಾಮ+ಅಣ್ಣ+ಅಯ್ಯ. (3) ಅಪ್ಪ+ಅಣ್ಣ+ಅಯ್ಯ. (4) ತಮ್ಮ+ಅಣ್ಣ+ಅಯ್ಯ. (5) ತಿಮ್ಮ+ ಅಪ್ಪ+ಅಣ್ಣ+ಅಯ್ಯ.

## ಅ ಭ್ಯಾ ಸ 7

ಪಠ್ಯ ಅಥವಾ ಉಪಪಠ್ಯ ಪುಸ್ತಕಗಳಲ್ಲಿ ಓದಿದ ವಿಷಯಗಳ ಕುರಿತು ನಾಲ್ಕು ಚಿಕ್ಕ ವಾಕ್ಯಗಳನ್ನು ಹೇಳಿಸುವ ಮೊದಲು, ವಿಷಯಕ್ಕೆ ಸಂಬಂಧಿಸಿದ ಕೆಲವು ಶಬ್ದಗಳನ್ನು ಹೇಳಿಸುವುದು. ಉದಾಹರಣೆ:—

ವಿಷಯ:—**ಸ್ಲೇಟು.** ಶಬ್ದಗಳು:—ಕಪ್ಪು; ಚೌಕಟ್ಟು; ಅಳಿಸು; ಒಡೆ; ಬರೆ.

ಮೇಲಿನ ಶಬ್ದಗಳನ್ನು ಇಟ್ಟು ವಾಕ್ಯಗಳನ್ನು ಮಾಡುವುದು.

ಸ್ಲೇಟು ಕಪ್ಪು. ಅದಕ್ಕೆ ಚೌಕಟ್ಟು ಇದೆ. ಸ್ಲೇಟು ಬರೆಯಲಿಕ್ಕೆ ಆಗುತ್ತದೆ. ಸ್ಲೇಟಿನಲ್ಲಿ ಬರೆದುದನ್ನು ಅಳಿಸಬಹುದು. ಕೆಳಗೆ ಬಿದ್ದರೆ ಸ್ಲೇಟು ಒಡೆಯುತ್ತದೆ.

ವಿಷಯ **ಆಡು.** ಶಬ್ದಗಳು:- ಮೇಕೆ, ಹೋತ, ಗಡ್ಡ, ಸೊಪ್ಪುಸೊದೆ, ಮಾಂಸ, ಚರ್ಮ.

ಮೇಲಿನ ಶಬ್ದಗಳನ್ನು ಇಟ್ಟು ವಾಕ್ಯಗಳನ್ನು ಮಾಡುವುದು.

ಮೇಕೆ ಎಂದರೆ ಹೆಣ್ಣು ಆಡು. ಹೋತ ಎಂದರೆ ಗಂಡು ಆಡು. ಗಂಡು ಆಡಿಗೆ ಗಡ್ಡ ಇದೆ. ಆಡುಗಳು ಸೊಪ್ಪುಸೊದೆಗಳನ್ನು ತಿನ್ನುತ್ತವೆ. ಆಡಿನ ಮಾಂಸವನ್ನು ಜನರು ತಿನ್ನುತ್ತಾರೆ. ಅದರ ಚರ್ಮದಿಂದ ಮದ್ದಳೆ ಮುಚ್ಚುತ್ತಾರೆ.

ವಿಷಯ:— **ನದಿ.** ಶಬ್ದಗಳು:— ಊರು, ಗ್ರಾಮ, ಹರಿ, ದೋಣಿ, ಸಾಗಿಸು, ಸ್ನಾನ, ಒಗೆ, ತಿಕ್ಕು.

ಮೇಲಿನ ಶಬ್ದಗಳನ್ನು ಇಟ್ಟು ವಾಕ್ಯಗಳನ್ನು ಮಾಡುವುದು.

ನದಿ ಹಲವು ಊರು ಮತ್ತು ಗ್ರಾಮಗಳಲ್ಲಿ ಹರಿಯುತ್ತದೆ. ನದಿಯನ್ನು ದಾಟಲಿಕ್ಕೆ ದೋಣಿಗಳು ಇವೆ. ದೋಣಿಗಳಲ್ಲಿ ಅಕ್ಕಿ, ಹುಲ್ಲು, ಹಂಚು ಮುಂತಾದುವನ್ನು ಸಾಗಿಸುತ್ತಾರೆ. ನದಿಗಳಲ್ಲಿ ಜನರು ಸ್ನಾನ ಮಾಡುತ್ತಾರೆ. ಬಟ್ಟೆ ಒಗೆಯುತ್ತಾರೆ. ಪಾತ್ರೆ ತಿಕ್ಕುತ್ತಾರೆ.

## ಅಭ್ಯಾಸ 8

ಒಂದೇ ಅರ್ಥ ಬರುವಂತೆ, ಬೇರೆ ಶಬ್ದಗಳನ್ನು ಇಟ್ಟು, ವಾಕ್ಯಗಳನ್ನು ಮಾಡುವು




ಉದಾಹರ ... ವನು. ರಾಮನು ಕೃಷ್ಣನಷ್ಟು ದೊಡ್ಡ

ಒಂದೇ ಅ ... ಶಬ್ದಗಳನ್ನು ಇಟ್ಟು ವಾಕ್ಯಗಳನ್ನು ಮಾಡುವುನು.

(1) ಬೆಕ್ಕಿಗಿಂತ ನರಿ ದೊಡ್ಡದು. (2) ನರಿಗಿಂತ ಆಡು ದೊಡ್ಡದು. (3) ಆಡಿಗಿಂತ ಹುಲಿ ದೊಡ್ಡದು. (4) ಹುಲಿಗಿಂತ ಆನೆ ದೊಡ್ಡದು.

